## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 205

ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 04-03-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ಜಿಲ್ಲೆ, ಕೃಷ್ಣರಾಜಪೇಟೆ ತಾಲ್ಲೂಕು, ತಿಮ್ಮಪ್ಪನ ಗುಡ್ಡ ಅರಣ್ಯ ಪ್ರದೇಶದ ಸರ್ವೆ ನಂಬರ್ 73ರ 38.15 ಗುಂಟೆ ಪ್ರದೇಶದಲ್ಲಿ ಕಳೆದ 20 ವರ್ಷಗಳಿಂದ ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿರುವ ಸುಮಾರು 36 ಜನ ನಿವೇಶನ ರಹಿತರಿಗೆ, ನಿವೇಶನ ಮಂಜೂರು ಮಾಡಿ ಹಕ್ಕುಪತ್ರ ನೀಡಲು ಕ್ರಮ ತೆಗೆದುಕೊಳ್ಳಲಾಗುವುದೇ; | ಮಂಡ್ಯ ಜಿಲ್ಲೆ, ಕೃಷ್ಣರಾಜಪೇಟೆ ತಾಲ್ಲೂಕು, ತಿಮ್ಮಪ್ಪನ ಗುಡ್ಡ ಸ.ನಂ. 73 ರ 38.15 ಗುಂಟೆ ಜಮೀನು ಅರಣ್ಯ ಜಮೀನಾಗಿರುವುದರಿಂದ ಅರಣ್ಯ ಇಲಾಖೆಯ ಅಭಿಪ್ರಾಯ ಪಡೆದು ಮುಂದಿನ ಕ್ರಮವಹಿಸಲಾಗುವುದು. |
| (ಆ) | ಕರ್ನಾಟಕ ಸರ್ಕಾರದ ಕಂದಾಯ ಇಲಾಖೆ ಅಧೀನ ಕಾರ್ಯದರ್ಶಿ (ಭೂ ಮಂಜೂರಾತಿ) ಪತ್ರ ಸಂಖ್ಯೆ ಆರ್ಡಿ 64/ಎಲ್‌ಜಿಪಿ/2015 ದಿನಾಂಕ 26-07-2016ರ ಸೂಚನೆಯ ಮೇರೆಗೆ ಸಂತೇಬಾಚಹಳ್ಳಿ ಗ್ರಾಮ ಪಂಚಾಯತಿಯ ಗ್ರಾಮದ ಅರಣ್ಯಹಕ್ಕು ಸಮಿತಿಯವರು ದಿನಾಂಕ 23/11/2018 ರಂದು ಸಭೆ ಸೇರಿ, ಅಲ್ಲಿ ವಾಸಿಸುತ್ತಿರುವ 36 ಜನ ನಿವೇಶನ ರಹಿತರಿಗೆ ನಿವೇಶನ ಮಂಜೂರು ಮಾಡಿ ಹಕ್ಕುಪತ್ರ ನೀಡುವಂತೆ ನಿರ್ಣಯ ಕೈಗೊಂಡು, ಅದನ್ನು ಮಂಡ್ಯ ಜಿಲ್ಲಾಧಿಕಾರಿಯವರಿಗೆ ಕಳುಹಿಸಿದ್ದು, ಈ ಬಗ್ಗೆ ತಕ್ಷಣ ಸೂಕ್ತ ಕ್ರಮ ಜರುಗಿಸಲಾಗುವುದೇ? | ಗ್ರಾಮ ಪಂಚಾಯತ್ ಅಧ್ಯಕ್ಷರು ಹಾಗೂ ಸದಸ್ಯರು ದಿನಾಂಕ:23.11.2018 ರಂದು ಉಪವಿಭಾಗಾಧಿಕಾರಿಯವರಿಗೆ ಸಲ್ಲಿಸಿದ್ದ ಅರ್ಜಿಗಳನ್ನು ಪರಿಶೀಲಿಸಿ, ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಗ್ರಾಮ ಮಟ್ಟದ ಗ್ರಾಮ ಅರಣ್ಯ ಹಕ್ಕು ಸಮಿತಿ ಸಭೆಯ ನಿರ್ಣಯದೊಂದಿಗೆ ಉಪ ವಿಭಾಗಾಧಿಕಾರಿಯವರಿಗೆ ಸಲ್ಲಿಸುವಂತೆ ಈಗಾಗಲೇ ಗ್ರಾಮ ಪಂಚಾಯತ್ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ತಿಳಿಸಲಾಗಿರುತ್ತದೆ. ಅದರಂತೆ ಪ್ರಸ್ತಾವನೆ ಬಂದ ನಂತರ ಅರಣ್ಯ ಇಲಾಖೆಯ ಅಭಿಪ್ರಾಯ ಪಡೆದು ಶೀಘ್ರವಾಗಿ ಕ್ರಮವಹಿಸಲಾಗುವುದು. |

(ಕಂಇ 18 ಎಲ್‌ಜಿಮ್ವೆ 2020)

(ಆರ್.ಅಶೋಕ)
ಕಂದಾಯ ಸಚಿವರು.